ಒಂದಾಣೆ ಮಾಲೆ 297

# ಶ್ರೀ ರಾಮಾನುಗ್ರಹ

## (ಭರತ ಮಿಲನ)

## (ಪೌರಾಣಿಕ ಏಕಾಂಕ)



ರಚಯಿತ:
ಶ್ರೀ। ಪಿ. ಎಸ್. ಗಣಪಯ್ಯ, 'ಶಾರದಾ ನಿಲಯ,' ಬಾಳಿಲ.



1960

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

# ಶ್ರೀರಾಮಾನುಗ್ರಹ

## (ಪೌರಾಣಿಕ ಏಕಾಂಕ)

.........

ಪಾತ್ರಗಳು: ಶ್ರೀರಾಮ, ಸೀತೆ, ಲಕ್ಷ್ಮಣ, ಭರತ ಮತ್ತು ಭರತನನ್ನು ಅನುಸರಿಸಿ ಬಂದ ಕೆಲವರು.

### ದೃಶ್ಯ ೧

(ಚಿತ್ರಕೂಟ ಪರ್ವತ. ಶ್ರೀರಾಮ--ಲಕ್ಷ್ಮಣ--ಸೀತೆಯರು ಇರುವರು.)

ಶ್ರೀರಾಮ: ಜಾನಕೀ, ಈ ಚಿತ್ರವಿಚಿತ್ರ ಚಿತ್ರಕೂಟವನ್ನು ನೋಡು! ತಂಗಾಳಿಗೆ ಮೈಯೊಡ್ಡಿ ಎಷ್ಟೊಂದು ಆನಂದದಿಂದ ಈ ಮೃಗಪಕ್ಷಿಗಳು ತಿರುಗಾಡುತ್ತಿವೆ! ಬಣ್ಣಬಣ್ಣದ ಹಕ್ಕಿಗಳ ಸುಮಧುರ ಗಾನದ ಇಂಪನ್ನಾಲಿಸು. ಮಂದಾಕಿನಿ ನದಿಯು ಪ್ರಶಾಂತವಾಗಿ ಹರಿವ ಆ ವೈಖರಿಯನ್ನು ನೋಡು! ಇದೋ, ಈ ಪುಷ್ಪಗಳು ಮೃದುಮಧುರವಾದ ಕಂಪನ್ನಿತ್ತು, ಲೋಕಸೇವಾಕಾರ್ಯದಲ್ಲಿ ನಿರತವಾಗಿರುವುವು! ಧರ್ಮಾತ್ಮನಾದ ಸೌಮಿತ್ರಿಯು ಸನಿಹದಲ್ಲಿಯೇ ಇದ್ದಾನೆ. ಸೊಗಸುಗಾರ್ತಿಯಾಗಿ, ಆನಂದಭರಿತಳಾಗಿ, ನಮ್ಮಸೇವಕಿಯಾಗಿ, ನೀನು ಇಲ್ಲಿರುವೆ. ಇನ್ನು ನಮಗೇನು ಬೇಕು? ಇದೇ ಅಯೋಧ್ಯೆಯಲ್ಲವೇ?

ಸೀತೆ: ದೇವಾ, ಈ ಚಿತ್ರಕೂಟದ ಚಿತ್ರವು ನಿಜವಾಗಿಯೂ ಆನಂದದ ಸುಗ್ಗಿ. ಲಕ್ಷ್ಮಣನಿತ್ತ ರುಚಿರುಚಿಯಾದ ಆಹಾರ ಅರಮನೆಯ ಹುಗ್ಗಿಗಿಂತಲೂ ಶ್ರೇಷ್ಠ. ಅಲ್ಲದೆ ನಿನ್ನ ಒಡನಾಟ ಇಲ್ಲಿಯ ಈ ಸತ್ಯ-ಶಿವ-ಸುಂದರ ನೋಟ. ಇದಕ್ಕಿಂತಲೂ ಹಿರಿದಾದುದು ಇನ್ನಾವುದಿದೆ? ರಾಮಾ, ನೀನಿರುವ ಈ ಸ್ಥಳವು ನನಗೆ ಅಯೋಧ್ಯೆಯಾಗಿಯೇ ತೋರುತ್ತಿದೆ. ಆನಂದವು ಉಕ್ಕಿ ಬರುತ್ತಿದೆ.

ಶ್ರೀರಾಮ: ಪ್ರಿಯೆ, ಮುನ್ನಡೆವ, ಬಾ. ಅದೋ, ಅಲ್ಲಿ ಲಕ್ಷ್ಮಣನು ತಂದಿತ್ತ ಆಹಾರವಿದೆ. ಒಂದಿಷ್ಟು ತಿಂದು ವಿರಮಿಸೋಣ. (ಬಂಡೆಯ ಬಳಿ ಕುಳಿತು ಆಹಾರ ಸೇವಿಸುವರು. ದೂರದಿಂದ ಏನೋ ಒಂದು ಕೋಲಾಹಲವು ಕೇಳಿಬರುವುದು.

ಸೀತೆ: (ಗಾಬರಿಯಿಂದ) ಪ್ರಾಣಕಾಂತ, ಅದೇನು ಸದ್ದು? ಪ್ರಳಯ ಕಾಲದ ಭೈರವನಂತೆ ಈ ಕಡೆ ಧಾವಿಸುತ್ತಾ ಇದೆ. ಮೃಗಗಳು ಓಡುತ್ತಿವೆ. ಹಕ್ಕಿಗಳು ಗರಿ ಕೆದರಿ ಹಾರಹತ್ತಿವೆ ರಾಮಾ, ಭಯವಾಗುತ್ತಿದೆ! ವಾಯು ಮಂಡಲವು ಧೂಳಿಯಿಂದಾವೃತವಾಗಿದೆ. ಆ ದೃಶ್ಯವನ್ನು ನಾನು ನೋಡಲಾರೆ. ಕಣ್ಣುಗಳು ಸೋತವು. ತಲೆತಿರುಗುತ್ತಾ ಇದೆ. ಆಧರಿಸು, ಆಧರಿಸು.

ಶ್ರೀರಾಮ: ಜಾನಕಿ, ಹೆದರಬೇಡ! ನಿನ್ನ ಬಳಿ ನಾನಿರಲು, ನಿನಗಾವ ಹೆದರಿಕೆ? ಸಂತೈಸಿಕೋ. (ಲಕ್ಷ್ಮಣನಿಗೆ) ಸೌಮಿತ್ರಿ ಕೋಲಾಹಲದಿಂದ ಬೆದರಿದ ಮೃಗಗಳು ದಿಕ್ಕೆಟ್ಟು ಓಡುತ್ತಿವೆ, ಪಕ್ಷಿಗಳು ಕೂಡಾ ಹೆದರಿ ಅಲ್ಲಲ್ಲೇ ಅವಿತುಕೊಂಡಿವೆಯಲ್ಲ? ಮೃಗಬೇಟೆಗಾಗಿ ಬಂದ ಯಾವನಾದರೂ ರಾಜನೋ ಅಥವಾ ಯಾವುದಾದರೂ ದುಷ್ಟ ಜಂತುವೋ, ನೋಡು!

ಲಕ್ಷ್ಮಣ: ಅಣ್ಣಾ, ಯಾವುದೋ ಒಂದು ಗಂಡಾಂತರವು ನಮಗೊದಗಿದಂತಿದೆ. ಏನೆಂಬುದನ್ನು ಈ ಮರವೇರಿ ನೋಡಲೇ?

ಶ್ರೀರಾಮ: ಲಕ್ಷ್ಮಣಾ, ಜಾಗ್ರತೆಯಾಗಿ ಮರವೇರಿ, ಸರಿಯಾಗಿ ಆ ಸದ್ದನ್ನಾಲಿಸು.

ಲಕ್ಷ್ಮಣ: (ಮರವೇರುವನು.) ಹೊಗೆಯಾಡುತ್ತಿರುವ ಆ ಅಗ್ನಿಯನ್ನು ನಂದಿಸು. ಸೀತಾದೇವಿಯನ್ನು ಗುಹೆಯಲ್ಲಿ ಬಚ್ಚಿಡು. ಕವಚವನ್ನು ಧರಿಸಿ, ಬಿಲ್ಲುಬಾಣಗಳನ್ನು ಹಿಡಿ. ಯಾವುದೋ ಒಂದು ದೊಡ್ಡ ಸೈನ್ಯ ಈ ಕಡೆ ಬರುತ್ತಿದೆ.

ಶ್ರೀರಾಮ: ವತ್ಸಾ, ಆ ಸೈನ್ಯ ಯಾರದಿರಬಹುದೆಂದು ಸ್ವಲ್ಪ ನೋಡಿ ಹೇಳು.

ಲಕ್ಷ್ಮಣ: (ದಿಟ್ಟಿಸಿ ನೋಡಿ) ಅಣ್ಣಾ, ಆ ಕೈಕೆಯಿಯ ಮಗ ಭರತನು ಸೈನ್ಯಸಮೇತನಾಗಿ ಬರಹತ್ತಿದ್ದಾನೆ! ಸಾಕೇತಸಾಮ್ರಾಜ್ಯದ ಪಟ್ಟ

ದಿಂದ ತೃಪ್ತನಾಗದೆ, ನಮ್ಮನ್ನು ಕೊಂದು ಪಟ್ಟವನ್ನು ಸ್ಥಿರಮಾಡಿಕೊಳ್ಳಲು ಈ ಕಡೆಗೆ ಬಂದಂತಿದೆ. ಆ ರಥದ ಮೇಲೆ ಕಂಗೊಳಿಸುವ ಧ್ವಜವೇ ಭರತನೆಂದು ಸಾರಿಹೇಳುತ್ತಾ ಇದೆ. ಅಣ್ಣಾ, ಧನುರ್ಧಾರಿಯಾಗು. ನಾವು ಯುದ್ಧ ಸನ್ನದ್ಧರಾಗಿ ಪರ್ವತಾಗ್ರದ ವಿಶಾಲ ಪ್ರದೇಶವನ್ನೇರುವ. ಬರಲಿ, ಆ ಭರತ ನಮ್ಮೆಲ್ಲರ ವ್ಯಥೆಗೆ ಕಾರಣವಾದ ಆತನನ್ನು ಕೊಂದು, ನಮ್ಮ ಹಗೆಯನ್ನು ತೀರಿಸುತ್ತೇನೆ. ನನ್ನ ಈ ಕೋಪಾಗ್ನಿಯಿಂದ ಭರತಸೇನಾ ಸಮೂಹವು ಸುಟ್ಟುಹೋಗಲಿ! ಈ ತೀಕ್ಷ್ಣವಾದ ಶರಾಘಾತದಿಂದ ಅವನ ಸೈನ್ಯವು ನುಚ್ಚುನೂರಾಗಲಿ! ಆ ಸೈನ್ಯದ ಬಿಸಿನೆತ್ತರನ್ನು ಕುಡಿದು ಚಿತ್ರ ಕೂಟವು ತಣಿಯಲಿ! ಆದಕ್ಕಾಗಿ ಅಣ್ಣಾ, ನನಗೆ ಅನುಜ್ಞೆಯಾಗಲಿ!

ಶ್ರೀರಾಮ: ಸೌಮಿತ್ರಿ, ಶಾಂತನಾಗು! ಕಿಡಿಗಾರುತ್ತಿರುವ ನಿನ್ನ ಮಾತು ನನಗೇ ಭಯವನ್ನುಂಟುಮಾಡುತ್ತದೆ. ಮಹಾ ರೋಷವನ್ನು ಕಡಿಮೆಮಾಡು. ವಿವೇಕಿಯಾಗು. ಪ್ರಾಜ್ಞನಾದ ಭರತನೇ ಬರುತ್ತಿರು ವಾಗ ಧನುಸ್ಸು, ಕವಚ, ಕತ್ತಿಗಳೇಕೆ? ಬಂಧುಹತ್ಯಾಪಾತಕವೆಂದರೆ ಅದು ವಿಷಮಿಶ್ರಿತ ಅನ್ನದಂತೆ. ನನಗೆ ಭರತನನ್ನು ಕೊಂದು ರಾಜ್ಯಸುಖವು ಬೇಕಾ ಗಿಲ್ಲ. ರಾಜ್ಯ ಬಂದರೂ ಸೋದರರಾದ ನಿಮ್ಮ ಸುಖಕ್ಕಲ್ಲದೆ ನನಗಲ್ಲ. ಅನ್ಯಾಯದಿಂದ ನನಗೆ ಯಾವ ಪದವಿಯೂ ಬೇಡ. ಸಹೋದರವಾತ್ಸಲ್ಯ ದಿಂದ ತುಂಬಿತುಳುಕುತ್ತಿರುವ ಆ ಭರತನನ್ನು ಕೊಂದು ನಾನು ರಾಜ್ಯ ಸ್ವೀಕರಿಸಲೆ? ಪ್ರೇಮಮಯ ಬಾಳ್ವೆಯನ್ನು ಭೇದಿಸಿ ನಾನು ಬದುಕಲೇ? ವತ್ಸಾ, ನಿನಗೆ ರಾಜ್ಯ ಬೇಕೆಂದಿದ್ದರೆ ಭರತನಿಂದ ಆ ಪದವಿಯನ್ನು ನಿನಗೆ ಕೊಡಿಸುತ್ತೇನೆ. ಆದರೂ ಕೊಲ್ಲುವ ಹವ್ಯಾಸಕ್ಕೆ ಬೀಳದಿರು.

ಲಕ್ಷ್ಮಣ: (ನಾಚುಗೆಯಿಂದ) ಅಣ್ಣಾ, ಕ್ಷಮಿಸು. ತಾಳ್ಮೆಗೆಟ್ಟು ವಿಚಾರಹೀನವಾಗಿ ಮಾತಾಡಿದುದಕ್ಕೆ ಮನ್ನಿಸು! ಆರ್ಯ, ನಿನ್ನನ್ನು ಕಾಣಲು ತಂದೆಯೇ ಬಂದಿದ್ದರೂ ಬಂದಿರಬಹುದು.

ಶ್ರೀರಾಮ: (ಸ್ವಗತ) ಎಂತಹ ಎಳೆತನದ ಮಾತಿದು! ಏನೊಂದೂ ಅರಿಯದ ಬಾಲಕನ ಮನಸ್ಸು, ಹಲವು ದಿನಗಳಿಂದ ಅಗಲಿದ ತಂದೆಯು ನೆನಪನ್ನು ತಂದಿತೇ? ಪಿತೃವಾತ್ಸಲ್ಯವು ಹೊರಹೊಮ್ಮಿತೇ? (ಪ್ರಕಾಶ) ಹೌದು, ಇರಲೂ ಬಹುದು. ನಮ್ಮನ್ನು ಹಿಂದಕ್ಕೆ ಕರೆಯಲು ತಂದೆಯೇ

ಬಂದಿದ್ದರೂ ಬಂದಿರಬಹುದು. ಯಾವುದಕ್ಕೂ ವಿಚಾರವಮಾಡೋಣ. ಆದರೆ, ಕುಮಾರ, ಶ್ವೇತಚ್ಛತ್ರವು ಕಾಣಬರುತ್ತಿಲ್ಲ. ನನಗೇಕೋ ಸಂದೇಹವಾಗುತ್ತಿದೆ. ವೃಕ್ಷಾಗ್ರದಿಂದ ಕೆಳಗಿಳಿದು ಇಲ್ಲಿಗೆ ಬಾ.

ಲಕ್ಷ್ಮಣ: ಅಣ್ಣಾ, ಅದೋ, ಅಲ್ಲಿ ಭರತನೇ ಬಂದ— ಉಕ್ಕಿಬರುವ ಕಡಲಿನ ತೆರೆ ಎದ್ದುಬಂದಂತೆ—ಬಂದ! (ತೆರೆ.)

## ದೃಶ್ಯ ೨

ಭರತ: ಇದೇ ಚಿತ್ರಕೂಟ. ನಿಸರ್ಗದ ಚೆಲುವ ನೋಟ. ಅನುದಿನದ ಶಾಂತಿಯುತ ಜೀವನದ ಪಾಠ ಇದೇ ಅಲ್ಲವೇ?—ಹೌದು, ಶ್ರೀರಾಮನ ಶಾಂತ ಮುಖಮುದ್ರೆಯ ಬೆಳಕಿನಿಂದ ಪ್ರಜ್ವಲಿಸುವ ನಯನ ಮನೋಹರ ಕಾಡು ಇದೇ ಅಲ್ಲವೆ? ನಿಜವಾಗಿಯೂ ಆ ಲಕ್ಷ್ಮಣನೇ ಪುಣ್ಯವಂತ, ಶ್ರೀರಾಮನ ಮುಖ ಕಮಲದ ದಿವ್ಯದರ್ಶನವನ್ನು ಪಡೆಯುವ ಆ ಸೌಮಿತ್ರಿಯೆ ಭಾಗ್ಯವಂತ. ಗಂಡನನ್ನೇ ಅನುಸರಿಸಿ ಬಂದಿರುವ ಆ ಪತಿವ್ರತಾ ಶಿರೋಮಣಿಯಾದ ಆ ಸೀತಾಮಾತೆ! ಎಂತಹ ಕೃತಕೃತ್ಯಳು! ಶ್ರೀರಾಮನಿಗೆ ವಾಸವನ್ನು ಕೊಟ್ಟಿರುವ ಆ ಚಿತ್ರಕೂಟ ಎಂತಹ ಭಾಗ್ಯಶಾಲಿ! ಆದರೆ, ನಾನು ದುರ್ದೈವಿ! ಅಣ್ಣನನ್ನು ಅಗಲಿರುವ ಭಾಗ್ಯಹೀನ! ಅರಮನೆಗೆ ಕಳಂಕವನ್ನು ತಂದಿರುವ ಮಾನಹೀನ! ಅಯ್ಯೋ, ವಿಧಿಯೇ!.... ಅನತಿ ದೂರದಲ್ಲಿ ಪರ್ಣಶಾಲೆಯೊಂದು ಗೋಚರಿಸುತ್ತಿದೆ. ಆ ಕಡೆಗೆ ಗಮನವಿತ್ತರೆ, ಇದಾರು? ನಾರುಮಡಿ, ಅಣ್ಣ ಶ್ರೀರಾಮನಲ್ಲವೆ? ಹೌದು, ಅಣ್ಣನನ್ನು ನೋಡುವ ನಾನೇ ಭಾಗ್ಯವಂತನು. ಸರ್ವ ತೇಜಸ್ವಿಯಾದ ಅಣ್ಣನು ಅದೋ ಅಲ್ಲಿರುವನು. ಸಾಕ್ಷಾತ್ ನಾರಾಯಣನೇ ಅವನು. (ಓಡಿ ಬಂದು) ಅಣ್ಣಾ....ಮನ್ನಿಸು.......ಮನ್ನಿಸು (ನಮಸ್ಕರಿಸುವನು)

ಶ್ರೀರಾಮ: ಭರತಾ, ಏಳು! ಸಹೋದರವಾತ್ಸಲ್ಯದಿಂದ ನಿನ್ನ ಮೈಸವರಿದ್ದೇನೆ. ಬಾ, ಬಳಿಯಲ್ಲಿಯೇ ಕುಳಿತಿರು. ಬಹಳ ದಿನಗಳ ನಂತರ ನಿನ್ನನ್ನು ಕಂಡಂತಾಯಿತು. ಅಯೋಧ್ಯಾನಗರದಲ್ಲಿ ಎಲ್ಲರೂ ಕ್ಷೇಮವೇ? ಅಮ್ಮ ಕೈಕೆಯಿಯೂ ಕ್ಷೇಮವೇ? ತಂದೆ ಸುಖವಾಗಿರುವರೇ? ಮಂತ್ರೀಜನ ಸಕಲ ಪರಿವಾರವೂ ಕ್ಷೇಮವೇ? ಕೇಕೆಯ ನಗರದಿಂದ

ನೀನೇಕೆ ಈ ಅರಣ್ಯಕ್ಕೆ ಬಂದೆ? ನಿನ್ನ ರಾಜ್ಯಭಾರವು ಸುಗಮವಾಗಿ ನಡೆ ದಿರುವುದೇ?

ಭರತ: ಅಣ್ಣಾ, ನಿನ್ನನ್ನಗಲಿದ ಆ ಕಡು ದುಃಖದಿಂದ ತಂದೆ ನಮ್ಮೆ ಲ್ಲರನ್ನಗಲಿ ಸ್ವರ್ಗಸ್ಥರಾದರು! ತಂದೆಯಿಲ್ಲದ ನನಗೆ ನೀನೇ ತಂದೆಯಣ್ಣ! ನೀನು ಅಯೋಧ್ಯೆಗೆ ಹಿಂತಿರುಗಿ ಬಂದು, ನಮ್ಮನ್ನು ಕಾಪಾಡು.

ಶ್ರೀರಾಮ: ಭರತಾ....ಭರತಾ! ತಂದೆಯವರು ನಮ್ಮನ್ನು ಅಗಲಿ ದರೇ? ಹಾಯ್! (ಶೋಕಭರಿತನಾಗಿ ಕುಳಿತುಕೊಳ್ಳುವನು).

ಭರತ: ಅಣ್ಣಾ....ಅಣ್ಣಾ....! (ಸಂತೈಸುವನು).

ಶ್ರೀರಾಮ: ಅಪ್ಪಾ, ನಿನ್ನ ಮರಣಕಾಲದಲ್ಲಿ ನಿನ್ನ ಬಳಿ ಇರುವ ಭಾಗ್ಯವೂ ನನಗಿಲ್ಲವಾಯಿತೇ? ವನವಾಸ ಮುಗಿದು ನಾನೆಂತು ಅಯೋ ಧ್ಯೆಗೆ ತೆರಳಲಿ! ಸೀತಾ! ನಿನ್ನ ಮಾವ ಸ್ವರ್ಗಸ್ಥರಾದರು! ಲಕ್ಷ್ಮಣಾ, ನೀನು ತಂದೆಯಿಲ್ಲದ ತಬ್ಬಲಿಯಾದೆ ಮಗೂ! ಅಯ್ಯೋ ವಿಧಿಯೇ! ಲಕ್ಷ್ಮಣಾ, ಮಂದಾಕಿನೀ ನದಿಗೆ ಹೋಗಿ ತಿಲೋದಕ ಬಿಟ್ಟು ಬರೋಣ.

(ತೆರೆ)

## ದೃಶ್ಯ ೩

ಶ್ರೀರಾಮ: ವತ್ಸಾ, ನೀನೇಕೆ ಈ ಜಟೆಯನ್ನೂ ನಾರುಮಡಿಗಳನ್ನೂ ಧರಿಸಿರುವೆ? ನೀನೇಕೆ ಇಲ್ಲಿಗೆ ಬಂದೆ?

ಭರತ: ಪೂಜ್ಯನೇ, ನಾನು ನಿನ್ನ ದಾಸನು. ನನಗೆ ಯಾವೊಂದು ರಾಜ್ಯಸುಖವೂ ಬೇಡ. ಅಣ್ಣಾ, ನೀನು ಬರಬೇಕು. ರಾಜ್ಯವನ್ನು ಸ್ವೀಕರಿಸಿ ಹತಭಾಗ್ಯನಾದ ನನ್ನ ಮನಸ್ಸಿಗೆ ಶಾಂತಿಯನ್ನು ತರಬೇಕು. ಪಾಪಿಯಾದ ನನ್ನ ತಾಯಿ ಈ ದುಷ್ಕಾರ್ಯಗಳನ್ನು ಎಸಗಿದಳು. ಅದ ನ್ನೊಂದನ್ನೂ ಮನಸ್ಸಿನಲ್ಲಿಡದೆ ರಾಜಧಾನಿಗೆ ಬಂದು, ಪಟ್ಟಾಭಿಷಿಕ್ತನಾಗಿ ರಾಜ್ಯಸೂತ್ರಗಳನ್ನು ಹಿಡಿಯಬೇಕೆಂದು ಪ್ರಾರ್ಥಿಸುತ್ತಿದ್ದೇನೆ.

ಶ್ರೀರಾಮ: ಮಗೂ, ತಾಯಿ-ತಂದೆಗಳನ್ನು ದೂರಬಾರದು! ಅದು ಪಾಪಕರ! ತಂದೆಯು ನನ್ನನ್ನು ಸದ್ವಾಕ್ಯ ಪರಿಪಾಲನೆಗಾಗಿ ಕಾಡಿಗೆ ಕಳುಹಿಸಿರುವನು. ಜಟಾವಲ್ಕಲಧಾರಿಯಾಗಿ ನಾನು ಹದಿನಾಲ್ಕು ವರ್ಷ

ಗಳ ವರೆಗೆ ಕಾಡಿನಲ್ಲಿ ಇದ್ದು ಅನಂತರ ಅಯೋಧ್ಯೆಗೆ ಮರಳಿ ಬರುವೆನು.
ಈಗ ಒತ್ತಾಯಿಸಬೇಡ.

ಭರತ: ಅಣ್ಣಾ, ನನ್ನ ತಾಯಿ ನನಗೆ ಸಾಕೇತ ನಗರವನ್ನು ಒದಗಿಸಿ ಕೊಟ್ಟಳು. ನಾನು ಅದನ್ನು ನಿನಗೆ ಕೊಡುತ್ತೇನೆ. ದಯಮಾಡಿ ಸ್ವೀಕರಿಸು! ಈ ಅಪಾರವಾದ ರಾಜ್ಯವನ್ನು ಪರಿಪಾಲಿಸಲು ನನಗೆ ಶಕ್ತಿಯಿಲ್ಲ. ಕುದುರೆಯ ವೇಷದಲ್ಲಿ ಕತ್ತೆಯೋಡೀತೇ? ಸಮಸ್ತ ಪ್ರಜಾ ಪರಿವಾರದ ಬಗ್ಗೆ ನಾನು ನಿನ್ನನ್ನು ಕೇಳಿಕೊಳ್ಳುತ್ತೇನೆ. ನೀನು ಅನುಗ್ರಹಿಸಬೇಕು.

ಶ್ರೀರಾಮ: ತಮ್ಮಾ, ನಾನು ಅರಣ್ಯವಾಸಮಾಡಬೇಕೆಂಬುದು ದೈವೇಚ್ಛೆ! ಮನುಷ್ಯನು ಸ್ವತಂತ್ರನಲ್ಲ. ಆತನು ವಿಧಿಯ ಕೈಗೊಂಬೆ. ಆದುದರಿಂದ ನೀನು ಹೀಗೆಲ್ಲ ಹಠಮಾಡಬಾರದು. ಎಲ್ಲರನ್ನೂ ಪ್ರೀತಿಯಿಂದ ಕಂಡು ರಾಜ್ಯವಾಳು. ಮಾನವದೇಹವು ಶಾಶ್ವತವಲ್ಲ, ಆಡುವ ಮಾತು, ನಡೆಯುವ ನಡೆ, ಶಾಶ್ವತ. ಆದುದರಿಂದ ನೀನು ಅಯೋಧ್ಯೆಗೆ ತೆರಳಿ ರಾಜ್ಯಭಾರ ಮಾಡು. ನಿನಗೆ ಯಶಸ್ಸುಂಟಾಗಲಿ! ಹೋಗು.

ಭರತ: ಆರ್ಯ, ಈ ವೇದಾಂತಗಳು ನನಗೆ ಹಿಡಿಸಲಾರವು. ಸಂತೋಷದಲ್ಲಿ ಸಂತೋಷವನ್ನೂ ವ್ಯಥೆಯಲ್ಲಿ ವ್ಯಥೆಯನ್ನು ಜಯಿಸಲು ಪರಮಜ್ಞಾನಿಯಾದ ನೀನೇ ಸಮರ್ಥನು. ಸಾಮಾನ್ಯನಾದ ನನಗೆ ಅದು ಹೇಗೆ ಸಾಧ್ಯ? ನೀನೆ ರಾಜನಾಗಬೇಕು. ಅದಕ್ಕೆ ಬೇಕಾದ ಸಾಮಗ್ರಿಗಳನ್ನು ನಾನು ತಂದಿದ್ದೇನೆ. ಆದುದರಿಂದ ನನ್ನ ಮಾತನ್ನು ಸ್ವೀಕರಿಸಿ ರಾಜನಾಗಬೇಕು. ನನ್ನ ಈ ಮಾತನ್ನು ನೀನು ನಡೆಸದಿದ್ದಲ್ಲಿ ನಾನು ಕೂಡಾ ನಿನ್ನ ಜೊತೆಯಲ್ಲಿಯೇ ಜಟಾಜೂಟನಾಗಿ ಈ ಅರಣ್ಯದಲ್ಲಿಯೇ ಇದ್ದು ಬಿಡುತ್ತೇನೆ.

ಶ್ರೀರಾಮ: ಭರತ, ನೀನು ರಾಜ್ಯವಾಳಲು ಸಮರ್ಥನಿರುವೆ.

ಭರತ: ಅಣ್ಣಾ, ನಾನು ಸಮರ್ಥನಲ್ಲ.

ಶ್ರೀರಾಮ: ನಿನ್ನಲ್ಲಿ ಆ ಯೋಗ್ಯತೆ ಇದೆ.

ಭರತ: ಅಂತಹ ಯೋಗ್ಯತೆ ನನ್ನಲ್ಲಿ ಎಂದೆಂದಿಗೂ ಇಲ್ಲ. ಅಣ್ಣಾ, ಹೆಚ್ಚು ಮಾತಾಡುವುದರಿಂದ ಪ್ರಯೋಜನವಿಲ್ಲ. ನೀನು ಪ್ರಸನ್ನನಾಗುವ

ವರೆಗೆ ನಾನು ಇಲ್ಲಿ ಮುಸುಕುಹಾಕಿ ಮಲಗುತ್ತೇನೆ. ನೀನು ಖಂಡಿತವಾಗಿಯೂ ಬರಬೇಕು.

ಶ್ರೀರಾಮ: ಭರತಾ, ಏತಕ್ಕಾಗಿ ಈ ಹಠ? ನೀನು ಪ್ರಾಜ್ಞನು. ನಾನು ಪಿತೃವಾಕ್ಯಪರಿಪಾಲನೆಗಾಗಿ ಇಲ್ಲಿಗೆ ಬಂದವನು. ಅದನ್ನು ಪೂರೈಸದೆ ಖಂಡಿತವಾಗಿಯೂ ನಗರಕ್ಕೆ ಮರಳಲಾರೆ. ಹಿರಿಯರ ಮಾತು ಅಲಂಘ್ಯವಲ್ಲ ಅದನ್ನು ನೀನು ಅರಿತೂ ಈ ರೀತಿಯಾಗಿ ವರ್ತಿಸುವುದೆಂದರೆ ನಮಗಚ್ಚರಿಯಾಗುತ್ತಿದೆ. ನಾನು ನಿನಗೆ ಹಿರಿಯನು. ನನ್ನ ಮಾತನ್ನು ಕೇಳಲಾರೆಯಾ?

ಭರತ: (ಸ್ವಗತ) ಅಣ್ಣಯ್ಯನ ಮಾತು ಅದಲುವಂತಿಲ್ಲ. ಆಕಾಶವೇ ಕಳಚಿಬಿದ್ದರೂ, ಸಮುದ್ರವೇ ಬತ್ತಿದರೂ, ವಸುಂಧರೆಯೇ ಕರಗಿಹೋದರೂ ಅವನು ಹಿಡಿದ ಮಾತನ್ನು ಬಿಡಲಾರನು! (ಪ್ರಕಾಶ) ಪೂಜ್ಯನೇ, ನಾನು ನಿನ್ನ ಮಾತಿಗೆ ಸೋಲಬೇಕಾಯಿತು! ಆದರೆ, ನಾನು ಸ್ವತಂತ್ರವಾಗಿ ರಾಜ್ಯಭಾರ ಮಾಡಲಾರೆ. ಅದು ನನ್ನಿಂದ ಸಾಧ್ಯವೂ ಇಲ್ಲ! ಆದುದರಿಂದ ನಾನು ನಿನ್ನಲ್ಲಿ ಒಂದು ವಿಚಾರವನ್ನು ಯಾಚಿಸಲೇ?

ಶ್ರೀರಾಮ: ಅಗತ್ಯವಾಗಿ ಕೇಳು, ಭರತ! ನಾನು ಅದಕ್ಕೆ ಬೇಡವೆನ್ನುವೆನೇ? ಏನು? ಹೇಳು, ಹೇಳು.

ಭರತ: ಅಣ್ಣಾ, ನಿನ್ನ ಪಾದವು ಪರಮಪೂಜ್ಯವಾಗಿದೆ. ಅದರಿಂದ ನನ್ನ ಬಾಳಿನ ಉತ್ಕರ್ಷೆಯಾಗಬೇಕು. ಹದಿನಾಲ್ಕು ವತ್ಸರಗಳ ಜೀವನ ಅದರಿಂದಲೇ ನಡೆಯಬೇಕೆಂದು ಪ್ರಾರ್ಥಿಸುತ್ತೇನೆ. ಆದುದರಿಂದ ನಿನ್ನ ಪಾದಗಳನ್ನು ರಕ್ಷಿಸುವ ಆ ಪಾದುಕೆಗಳನ್ನು ನನಗೆ ದಯಪಾಲಿಸಬೇಕು! ಅದನ್ನೇ ನಿಮಿತ್ತವಾಗಿಟ್ಟುಕೊಂಡು, ಅದರ ಹೆಸರಿನಿಂದಲೇ ಸಾಕೇತ ನಗರದ ಪಾಲನೆಮಾಡುತ್ತೇನೆ. ಅದಕ್ಕಾಗಿ ಅಂಜಲೀಬದ್ಧನಾಗಿ ನಾನು ಬೇಡುತ್ತೇನೆ. ಮತ್ತು ನೀನು ಹದಿನಾಲ್ಕು ವರುಷ ಕಳೆದ ವಸಂತಋತುವಿನ ಪ್ರಥಮ ದಿನವೇ ಬಂದು ಸಾಕೇತ ನಗರದ ಪಟ್ಟವನ್ನು ಏರಬೇಕು. ಆ ದಿನ ನೀನು ಬಾರದಿದ್ದಲ್ಲಿ ನಾನು ಅಗ್ನಿಪ್ರವೇಶಮಾಡಿ. ಆತ್ಮಹತ್ಯೆಮಾಡಿಕೊಳ್ಳುತ್ತೇನೆ! ಆದುದರಿಂದ ನೀನು ಆ ದಿನ ಬರಲೇ ಬೇಕು.

ಶ್ರೀರಾಮ: ಹಾಗೆಯೇ ಆಗಲಿ. ಹದಿನಾಲ್ಕು ವರುಷ ಕಳೆದು ವಸಂತಋತುವಿನ ಶುಭದಿನದಲ್ಲಿಯೇ ಖಂಡಿತವಾಗಿ ಬರುವೆನು. ಇದೋ, ಪಾದುಕೆಗಳನ್ನು ಸ್ವೀಕರಿಸು. (ಎರಡೂ ಕೈಗಳಿಂದ ತೆಗೆದುಕೊಳ್ಳುವನು.) ಭರತ, ನಿನ್ನ ತಾಯಿಯನ್ನು ಉಚಿತರೀತಿಯಿಂದ ಕಾಣು! ಅವಳಲ್ಲಿ ಕೋಪ ಮಾಡಬೇಡ........ನಿನಗೆ ದಾರಿಯು ಮಂಗಲವಾಗಲಿ!

ಭರತ: (ಪಾದುಕೆಗಳನ್ನು ತಲೆಯಲ್ಲಿ ಧರಿಸಿ) ಅಣ್ಣಾ, ನಾನು ನಿನ್ನ ಅನುಜ್ಞೆಯಂತೆ ರಾಜಧಾನಿಗೆ ಮರಳುತಿದ್ದೇನೆ! ನಿನ್ನ ಪಾದುಕೆಗಳನ್ನು ಸಿಂಹಾಸನದಲ್ಲಿರಿಸಿ, ನಿನ್ನ ಹೆಸರಲ್ಲಿ, ಆಳಾಗಿ ಆಳ್ವಿಕೆ ನಡೆಸುವೆನು. ಅಣ್ಣಾ, ಇದೋ—ಶಿರಬಾಗುತಿದ್ದೇನೆ! ಆಶೀರ್ವದಿಸು, ಆಶೀರ್ವದಿಸು!

(ಭರತನು, ಪಾದುಕೆಗಳನ್ನು ಕೈಯಲ್ಲಿ ಹಿಡಿದುಕೊಂಡು, ಶ್ರೀರಾಮನಿಗೆ ಶಿರಬಾಗಿ ನಿಲ್ಲುವನು. ಶ್ರೀರಾಮನು ಕೈಗಳನ್ನೆತ್ತಿ ಆಶೀರ್ವದಿಸುತ್ತಿರಲು—) (ತೆರೆ.)

ಸಂಪೂರ್ಣ.



Edited, Printed & Published by K. V. Shenoy
at The Prabhat Printers Ltd., Mangalore.